# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಡಾ॥ ವೈ. ಎ. ನಾರಾಯಣಸ್ವಾಮಿ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 651

ಉತ್ತರಿಸಬೇಕಾದ ದಿನಾಂಕ : 22-02-2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೋಲಾರ/ಚಿಕ್ಕಬಳ್ಳಾಪುರ ನಗರದಲ್ಲಿ ಎಷ್ಟು ಸಹಕಾರ ಬ್ಯಾಂಕುಗಳಲ್ಲಿ ಹಣದ ಅವ್ಯವಹಾರವಾಗಿ ಗ್ರಾಹಕರಿಗೆ ತೊಂದರೆ ಉಂಟಾಗಿದೆ; (ವಿವರ ನೀಡುವುದು) | ಕೋಲಾರ ಮತ್ತು ಚಿಕ್ಕಬಳ್ಳಾಪುರ ಈ ಎರಡು ಜಿಲ್ಲೆಗೆ ಸೀಮಿತವಾಗಿ ಕಾರ್ಯವ್ಯಾಪ್ತಿಯನ್ನು ಹೊಂದಿ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ ವ್ಯಾಪ್ತಿಯಲ್ಲಿ ಶಾಖೆಗಳನ್ನು ಹೊಂದಿರುವ ಕೋಲಾರ ಮತ್ತು ಚಿಕ್ಕಬಳ್ಳಾಪುರ ಡಿ.ಸಿ.ಸಿ. ಬ್ಯಾಂಕ್ ನಿ., ಕಾರ್ಯನಿರ್ವಹಿಸುತ್ತಿದೆ.<br><br>ಕೋಲಾರ ಜಿಲ್ಲೆಯಲ್ಲಿ 06 ಶಾಖೆಗಳು ಮತ್ತು 01 ವಿಸ್ತರಣಾ ಕೌಂಟರ್ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ 06 ಶಾಖೆಗಳನ್ನು ಅಂದರೆ ಒಟ್ಟು 12 ಶಾಖೆಗಳು ಮತ್ತು 01 ವಿಸ್ತರಣಾ ಶಾಖೆ ಹೊಂದಿರುತ್ತದೆ. ಕೋಲಾರ – ಚಿಕ್ಕಬಳ್ಳಾಪುರ ಬ್ಯಾಂಕಿನಲ್ಲಿ ಹಣದ ಅವ್ಯವಹಾರದ ಬಗ್ಗೆ ದೂರು ಅರ್ಜಿಗಳು ಬಂದಿರುತ್ತವೆ. ಆದರೆ, ಬ್ಯಾಂಕಿನ ಗ್ರಾಹಕರಿಗೆ ಯಾವುದೇ ತೊಂದರೆ ಉಂಟಾಗಿರುವ ಬಗ್ಗೆ ವರದಿಯಾಗಿರುವುದಿಲ್ಲ.<br><br>ಕೋಲಾರ ಕೋಲಾರ-ಚಿಕ್ಕಬಳ್ಳಾಪುರ ನಗರಗಳಲ್ಲಿ ಯಾವುದೇ ಪಟ್ಟಣ ಸಹಕಾರ ಬ್ಯಾಂಕುಗಳು ನೋಂದಣಿಯಾಗಿರುವುದಿಲ್ಲ. |
| ಆ | ಹಣದುರುಪಯೋಗವಾಗಿರುವ ಸಹಕಾರಿ ಬ್ಯಾಂಕುಗಳ ಮೇಲೆ ಹಾಗೂ ಆಡಳಿತ ಮಂಡಳಿಯವರ ಮೇಲೆ ಕೈಗೊಳ್ಳಲಾದ ಕ್ರಮಗಳೇನು; | **ಕಲಂ 64 ರ ವಿಚಾರಣೆ**<br>ಕೋಲಾರ ಮತ್ತು ಚಿಕ್ಕಬಳ್ಳಾಪುರ ಡಿ.ಸಿ.ಸಿ ಬ್ಯಾಂಕ್ ನಿ., ಕೋಲಾರ ಈ ಬ್ಯಾಂಕಿನ ಹಣದ ಅವ್ಯವಹಾರವಾಗಿ ಸ್ವೀಕೃತವಾದ ದೂರು ಅರ್ಜಿಗಳನ್ವಯ ಈ ಕೆಳಕಂಡ ಆರೋಪಗಳ ಸತ್ಯಾಸತ್ಯತೆಯನ್ನು ಪರಿಶೀಲಿಸಿ, ಜವಾಬ್ದಾರಿ ನಿಗಧಿಪಡಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ. 64 ರಡಿ ಶಾಸನಬದ್ಧ ವಿಚಾರಣೆಗೆ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ರವರು ಆದೇಶಿಸಿರುತ್ತಾರೆ.<br>1. ಬ್ಯಾಂಕಿನ ಅಧಿಕಾರಿ ಜಿ. ಚಂದ್ರಶೇಖರ್ ಎಂಬುವರು 2017-18 ನೇ ಸಾಲಿನ ಬ್ಯಾಂಕಿನ ಚಿಂತಾಮಣಿ ಶಾಖೆಯಲ್ಲಿ ವ್ಯವಸ್ಥಾಪಕರಾಗಿ ಕೆಲಸ ನಿರ್ವಹಿಸಿರುವ ಅವಧಿಯಲ್ಲಿ 2019-20 ಮತ್ತು 2020-21ನೇ ಸಾಲಿನಲ್ಲಿ ವಿವಿಧ ಸಹಕಾರ ಸಂಘಗಳಿಗೆ ಮತ್ತು ಸಂಸ್ಥೆಗೆ ಹಣ ವರ್ಗಾವಣೆ ಮಾಡಿರುವ ಸಿಂಧುತ್ವದ ಬಗ್ಗೆ.<br>2. ಬ್ಯಾಂಕಿನ ಕೇಂದ್ರ ಕಛೇರಿಯ ಶಾಖೆಯಲ್ಲಿ ಬಿ.ಎಸ್.ಎನ್.ಎಲ್. ನೌಕರರ ಪತ್ತಿನ ಸಹಕಾರ ಸಂಘಕ್ಕೆ ದಿನಾಂಕ:30-11-2012 ರಂದು ಮಂಜೂರಾಗಿರುವ ರೂ.2.50 ಕೋಟಿ ಸಾಲವನ್ನು ಆಡಳಿತ ಮಂಡಳಿಯು ಬೈಲಾ ಹಾಗೂ ಸಾಲ ನಿಯಮಾವಳಿ ರೀತ್ಯಾ ಸಾಲ ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆಯೇ. |

| | | |
|---|---|---|
| | | 3. 2017-18 ನೇ ಸಾಲಿನ ಬ್ಯಾಂಕಿನ ಡೈರಿ ಶಾಖೆಯಲ್ಲಿ ವ್ಯವಸ್ಥಾಪಕರಾಗಿ ಕೆಲಸ ನಿರ್ವಹಿಸಿರುವ ಅವಧಿಯಲ್ಲಿ ಶ್ರೀ ಲಕ್ಷ್ಮೀ ನಾರಾಯಣ ಎಂಬುವರ ಹೆಸರಿನಲ್ಲಿ ಮಂಜೂರಾಗಿರುವ ರೂ.20.00 ಲಕ್ಷಗಳ ಗೃಹ ಸಾಲ ಮತ್ತು ಶ್ರೀ ಚಂದ್ರಶೇಖರಾಚಾರಿ .ಕೆ ಎಂಬುವರ ಹೆಸರಿನಲ್ಲಿ ಮಂಜೂರಾಗಿರುವ ರೂ. 12.00 ಲಕ್ಷಗಳ ಗೃಹ ಸಾಲವು ಬೈಲಾ ಹಾಗೂ ಸಾಲ ನಿಯಮಾವಳಿ ರೀತ್ಯಾ ಆಡಳಿತ ಮಂಡಳಿ ಅನುಮೋದನೆಯೊಂದಿಗೆ ಮಂಜೂರು ಮಾಡಿ ಬಿಡುಗಡೆ ಮಾಡಲಾಗಿದೆಯೇ.<br><br>64ರ ವಿಚಾರಣೆಯು ಮುಕ್ತಾಯಗೊಂಡಿದ್ದು, ವರದಿ ಸ್ವೀಕೃತವಾಗಿದ್ದು ಸಕ್ಷಮ ಪ್ರಾಧಿಕಾರಿಯಾದ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರ ಪರಿಶೀಲನೆಯಲ್ಲಿರುತ್ತದೆ.<br><br>**ಕಲಂ 65 ರ ಪರಿವೀಕ್ಷಣೆ**<br><br>ಕೋಲಾರ ಜಿಲ್ಲೆ ಮತ್ತು ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ಮತ್ತು ಈ ಬ್ಯಾಂಕಿನಡಿ ಬರುವ ಎಲ್ಲಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು (ಪ್ಯಾಕ್ಸ್) ಕಳೆದ 5 ವರ್ಷಗಳಲ್ಲಿ ಅಂದರೆ, 2016-17, 2017-18, 2018-19, 2019-20 ಮತ್ತು 2020-21 ನೇ ಸಾಲಿನಲ್ಲಿ ನೀಡಿರುವ ಸ್ವಸಹಾಯ ಗುಂಪುಗಳ (Self Help Group) ಸಾಲದ ವಿವರಗಳನ್ನು ಪರಿಶೀಲಿಸಿ ನೀಡಿರುವ ಸಾಲ ಹಾಗೂ ನಿಗಧಿತ ಅವಧಿಯಲ್ಲಿ ಸಾಲ ವಸೂಲಾಗಿದೆಯೇ ಮತ್ತು ಸರ್ಕಾರದಿಂದ ನಿಗಧಿತ ಬಡ್ಡಿದರದಲ್ಲಿ ಸಹಾಯಧನ ಕ್ಲೇಂ ಮಾಡಲಾಗಿದೆಯೇ ಅಥವಾ ಹೆಚ್ಚುವರಿ ಬಡ್ಡಿ ಕ್ಲೇಂ ಮಾಡಲಾಗಿದೆಯೇ ಸರ್ಕಾರದಿಂದ ಬಿಡುಗಡೆಯಾದ ಬಡ್ಡಿ ಸಹಾಯಧನ ಸಂಬಂಧಪಟ್ಟವರಿಗೆ ತಲುಪಿದೆಯೇ ಅಥವಾ ದುರುಪಯೋಗವಾಗಿದೆಯೇ ಎಂಬುದರ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲು ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ. 65 ರಡಿ ಶಾಸನಬದ್ಧ ಪರಿವೀಕ್ಷಣೆಗೆ ಆದೇಶಿಸಲಾಗಿರುತ್ತದೆ. ಪರಿವೀಕ್ಷಣೆಯು ಪ್ರಗತಿಯಲ್ಲಿರುತ್ತದೆ. |
| ಇ | ಮದುವೆ, ಮುಂಜಿ ಮುಂತಾದ ಕಾರಣಗಳಿಗಾಗಿ ಹಣ ಡ್ರಾ ಮಾಡಲು ಅಗದೇ ತೊಂದರೆಗೊಳಗಾಗಿರುವ ಗ್ರಾಹಕರ ಅನುಕೂಲಕ್ಕಾಗಿ ಯಾವ ರೀತಿಯ ಕಾರ್ಯಕ್ರಮಗಳನ್ನು ಸರ್ಕಾರ ಹಮ್ಮಿಕೊಂಡಿದೆ? | ಮದುವೆ, ಮುಂಜಿ ಮುಂತಾದ ಕಾರಣಗಳಿಗಾಗಿ ಹಣ ಡ್ರಾ ಮಾಡಲು ಅಗದೇ ಇರುವ ಪ್ರಕರಣಗಳು ವರದಿಯಾಗಿರುವುದಿಲ್ಲ. |

**ಸಂಖ್ಯೆ ಸಿಒ 13 ಸಿಆರ್‌ಸಿ 2022**

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು